# ಡಿಸೆಂಬರ್ 2015

BANNERUGHATTA

WILDLIFE
CONSERVATION
GROUP



* ಕಟ್ಟು-ನಾಗನ ಕಾಳಗ
* ದುರ್ಗಪ್ಪನ ಶಿಕಾರಿ
* ಬಣ್ಣ ಬದಲಿಸುವ ಓತಿ
* ನಗರದಲ್ಲಿ ಇಂದು
* ಪ್ರಕೃತಿ ಬಿಂಬ


**ಲೇಖಕ ವೃಂದ**

ನಾಗೇಶ್ .ಓ .ಎಸ್

ಮಹದೇವ .ಕೆ .ಸಿ

ಸ್ಮಿತಾ ರಾವ್

ಕೃಷ್ಣನಾಯಕ್

ಅಂಕಿತ್ ಚಿಂತಪಲ್ಲಿ

**ವಿನ್ಯಾಸ**

ಅಶ್ವಥ .ಕೆ.ಎನ್

**ಮುಖಪುಟ ಛಾಯಾಚಿತ್ರ**

ಕಾರ್ತಿಕ್ .ಎ .ಕೆ

**ಪರಿಷ್ಕರಣೆ**

ಮುರಳಿ .ಎಸ್



# ಕಟ್ಟು - ನಾಗನ ಕಾಳಗ

ದೊಡ್ಡಿ ಗಿರಿಗೌಡರು ಸುತ್ತಮುತ್ತ ಇರೋ ಹದಿನಾರು ಹಳ್ಳಿಗಳಿಗೂ ಚಿರಪರಿಚಿತರಾಗಿದ್ದರು. ಅವರ ದೈತ್ಯ ದೇಹ, ಮೀಸೆಯಿಲ್ಲದ ದಪ್ಪನೆಯ ಗುಂಡುಮುಖ, ಬೋಳು ತಲೆಯನ್ನು ಕಂಡಾಕ್ಷಣ ಎಂತವರಿಗೂ ಒಂದು ರೀತಿಯ ಭಯ ಬರುತ್ತಿದ್ದರೂ, ಅವರ ಇಂಪಾದ ಕಪಟ ರಹಿತ ಅನುಭವದ ಮಾತು, ವಿನಯತೆ, ಸೌಜನ್ಯದಿಂದ ಕೂಡಿದ್ದ ಅವರ ವ್ಯಕ್ತಿತ್ವವೇ ಎಲ್ಲರೂ ಗೌರವಿಸುವುದಕ್ಕೆ ಕಾರಣವಾಗಿತ್ತು. ಅಂದು ಸ್ವತಂತ್ರ್ಯ ಪೂರ್ವದಲ್ಲೇ ಇಡೀ ಕನಕಪುರ ತಾಲ್ಲೂಕೇ ಬರದಿಂದ ರಕ್ಷಿಸಿಕೊಳ್ಳಲು ಗೂಳೆ ಹೊರಟಿದ್ದಾಗ ಇವರೂ, ತನ್ನ ಹೆಂಡತಿ, ಎರಡು ಸಣ್ಣ ಮಕ್ಕಳು ಹಾಗೂ ಎರಡು ರಾಸು ಹಸುಗಳೊಡನೆ ಆಹಾರವನ್ನರಸುತ್ತಾ ಬಂದು ಬನ್ನೇರುಘಟ್ಟ ಕಾಡಿನಲ್ಲಿ ಆಲದಮರದಂತೆ ಬೇರೂರಿ ಶ್ರಮದಿಂದ ಎರಡು ಜಗುಲಿಗಳನ್ನೊಳಗೊಂಡ ದೊಡ್ಡ ತೊಟ್ಟಿಯ ಮನೆಯನ್ನು ಕಟ್ಟಿ, ಮನೆಯ ಮುಂದೆಯೇ ಕಾಡಾಗಿದ್ದ ಹತ್ತು ಎಕರೆಯನ್ನು ಬೆಳೆ ಬೆಳೆಯಲು ಯೋಗ್ಯವಾಗುವಂತೆ ಅನುವುಮಾಡಿ ವರುಷದೊಂಭತ್ತು ಕಾಲವು ಗಂಗಾಮಾತೆಯಿಂದ ತೊಂದರೆ ಇರದಂತೆ ಕಲ್ಲಿನ ಬಾವಿ ತೋಡಿ ಕೆಲವು ಹಣ್ಣಿನ ಮರಗಳನ್ನು ಕಲ್ಪವೃಕ್ಷಗಳನ್ನೂ, ಹಲವಾರೂ ಬೆಳೆಗಳನ್ನು ಬೆಳೆಸಿ  ಬೃಹದಾಕಾರವಾಗಿ ಬೆಳೆದಿದ್ದ ತನ್ನ ಕುಟುಂಬಕ್ಕೆ ನೆರಳಾಗಿದ್ದ ಅವರು ಪರಲೋಕಕ್ಕೆ ಪಾದ ಬೆಳೆಸಿ ಕೆಲವೇ ವರುಷಗಳಾದವು.



ಅವರು ಸ್ವರ್ಗಸ್ಥರಾದ ಮೇಲೆ ತೋಟದ ಬೆಳೆಗಳೂ ಸ್ವಲ್ಪ-ಸ್ವಲ್ಪವೇ ಇವರನ್ನೇ ಹಿಂಬಾಲಿಸಿದ್ದರಿಂದ ಲಂಟಾನ ಗಿಡಗಳು ಬ್ರಿಟೀಷರಂತೆ ತೋಟವನ್ನು ಆಕ್ರಮಿಸಿ ತಮ್ಮ ಅಸ್ತಿತ್ವವನ್ನು ಪ್ರಭಲಗೊಳಿಸಿರುವುದರಿಂದ ಈಗ ತೋಟವಿಡೀ ಬರೀ ಲಂಟಾನ ಪೊದೆಯೇ ಆಗಿ ಹೋಗಿದೆ. ಇದಕ್ಕೆ ಬೆಳೆದ ಮೊಮ್ಮಕ್ಕಳು ಧನಲಕ್ಷ್ಮಿಯನ್ನರಸಿ ಪಟ್ಟಣ ಸೇರಿರುವುದು ಒಂದು ಕಾರಣವಾದರೂ ಗೌಡರ ಕಲ್ಲು ಬಾವಿಯಲ್ಲಿನ ನೀರು ಪಾತಾಳ ಸೇರಿರುವುದೇ ಮುಖ್ಯ ಕಾರಣ.

ಅವರ ಮೊಮ್ಮಗನಾದ ನಾನು, ತಾತ ಬೆಳೆದಿದ್ದ ಹಣ್ಣುಗಳ ಆಸೆಗೋ ಅಥವಾ ಆ ತುಂಬು ಕುಟುಂಬದಲ್ಲಿ ಆಡಲು ರಾಶಿ ಹುಡುಗರಿದ್ದ ಕಾರಣಕ್ಕೋ ಅಂತೂ ನನ್ನ ಬಾಲ್ಯವನ್ನು ಹೆಚ್ಚು ಅಲ್ಲಿಯೇ ಕಳೆದಿದ್ದೇನೆ. ಆ ಸವಿಗಳಿಗೆಗಳನ್ನು ನೆನಪಿಸಿಕೊಳ್ಳಲು ಆಗೊಮ್ಮೆ, ಈಗೊಮ್ಮೆ ಭೇಟಿಯಿಡುತ್ತಲೇ ಇರುತ್ತೇನೆ.

ಹೀಗೆ ಮೊನ್ನೆ ಆ ಸವಿಯನ್ನಾಸ್ವಾಧಿಸಲು ನಾನು ತಾತನ ಮನೆಗೆ ಬೇಟಿಯಿಟ್ಟಾಗ ಘಂಟೆ ಸಂಜೆ ಆರಾಗಿತ್ತು. ಏಕೋ ಮನಸ್ಸಿಗೆ ತಾತನ ತೋಟವನ್ನೊಮ್ಮೆ ಸುತ್ತಬೇಕೆನಿಸಿ, ಏಕಾಂತವಾಗಿ ತೋಟದ ಕಡೆ ನಡೆದೆ. ತೆಂಗಿನ ಮರಗಳಲ್ಲಿ ನುಸುಳಿ ಬರುತ್ತಿರುವ ಸೂರ್ಯನ ಆ ದಿನದ ಕೊನೆಯ ಕಿರಣಗಳು, ಸುತ್ತಲೂ ಸ್ವಚ್ಛಂದವಾದ ಹಸಿರು, ತಮ್ಮ ತಮ್ಮ ಗೂಡು ಸೇರಲು ತುಂಬಾ ಚಟುವಟಿಕೆಗೊಂಡಿರುವ ಹಕ್ಕಿಗಳ ಕಲರವ ಎಲ್ಲವೂ ನನ್ನ ಮನಸ್ಸಿಗೆ ವ್ಹಾ..... ಎಂತಾ ರಮಣೀಯ ದೃಶ್ಯ ಎಂದೆನಿಸಿದರೂ ತಾತನ ತೋಟದ ಪಕ್ಕದ ತೋಟದವರು ಬೆಳೆದಿದ್ದ ಹುರುಳಿ, ಅವರೆ ಮುಂತಾದ ಬೆಳೆಗಳನ್ನು ಕಂಡು ಒಮ್ಮೆ ಖೇಧವಾಯಿತು. ಕಾಂಚಾಣವನ್ನರಸಿ ಹೊರಟಿರುವ ಯುವಪೀಳಿಗೆಯಾದ ನಾವು ನಮ್ಮ ವಂಶಸ್ಥರು ಕಷ್ಟಪಟ್ಟು ಸಂಪಾದಿಸಿರುವ ಆಸ್ತಿಯನ್ನು ಹಣದಿಂದ ಅಳೆಯುತ್ತಿದ್ದೇವಲ್ಲಾ! ಈ ಭೂತಾಯಿಯಿಂದ, ನಿಸರ್ಗದಿಂದ ಆದಷ್ಟು ದೂರವಿರಲೆಂದೇ ಹೋರಾಡುತ್ತಿದ್ದಿವಲ್ಲಾ!! ಎಲ್ಲಿಗೆ ನಮ್ಮ ಪಯಣ? ಎಲ್ಲಿದೆ ನಮ್ಮ ಗುರಿ? ಎಂದೆಲ್ಲಾ ಪ್ರಶ್ನೆಗಳು ನನ್ನ ಕಾಡುತ್ತಿದ್ದವಾದರೂ. . . ಆ ತೋಟದಲ್ಲಿ ಕಳೆದಿದ್ದ ಬಾಲ್ಯದ ನೆನಪುಗಳು ಈ ಪ್ರಶ್ನೆಗಳನ್ನು ಹುದುಗಿಹೋಗುವಂತೆ ಮಾಡಿದವು.



ಮೊದಲು ಮರವೇರಲು ಕಲಿಸಿದ ತೆಂಗಿನ ಮರ, ಪಂದ್ಯಕ್ಕಾಗಿ ಆಗದಿದ್ದರೂ ಹೆಚ್ಚು ಎಳನೀರು ಕುಡಿದು ವಾಂತಿ ಮಾಡಿಕೊಂಡಿದ್ದು, ಟ್ಯೂಬ್ ಹಾಕಿಕೊಂಡು ಮೊದಲ ಸಲ ಈಜಲು ಬಾವಿಗೆ ಬಿದ್ದು ನೀರು ಕುಡಿದದ್ದು, ತೋಟದ ಇಂಚಿಂಚು ಒಂದೊಂದು ಘಟನೆಯನ್ನು ನೆನಪಿಸುತ್ತಿತ್ತು. ನಾವು ದೊಡ್ಡವರಾಗದೆ ಹಾಗೆ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತಲ್ಲವೇ? ಎನಿಸಿತು. ಹೀಗೆ ಬಾಲ್ಯವನ್ನು ಮೆಲುಕು ಹಾಕುತ್ತಾ ಬಾವಿಯ ಪಕ್ಕದಲ್ಲೇ ಇದ್ದ ಚೇಪೆ ಮರದಿಂದ ಒಂದು ಕೆಂಪಾದ ಹಣ್ಣನ್ನು ಕಿತ್ತು ತಿನ್ನುತ್ತಾ ಆ ಪಾಳು ಬಾವಿಯಲ್ಲಿ ಒಡಾಡುತ್ತಿದ್ದ ಹೆಗ್ಗಣಗಳನ್ನು ನೋಡುತ್ತಿದ್ದಾಗ, ನನ್ನ ಕಿವಿಗೆ *"ಹಾವು. . .ಹಾವು. . . ದೊಣ್ಣೆ ಎತ್ಕೋ ಬರ್‍ರೋ . . ."* ಎಂದು ಪಕ್ಕದ ತೋಟದ ಚಿಕ್ಕೀರ ಚೇರಿದ್ದು ಕೇಳಿಸಿತು. ನಾನು ತಾತನ ತೋಟದ ಲಂಟಾನ ಬೇಲಿಯನ್ನಾರಿ, ಚಿಕ್ಕೀರ ಹಾಕಿದ್ದ ಹುರುಳಿ ಗಿಡಗಳನ್ನು ಎಚ್ಚರ ತಪ್ಪಿಯೂ ತುಳಿಯದಂತೆ ಅವ ನಿಂತಿದ್ದ ಜಾಗಕ್ಕೆ ಬಂದು ನಿಂತೆ. ನನ್ನಂತೆಯೇ ಅಕ್ಕಪಕ್ಕದಲ್ಲಿರುವ ಎಲ್ಲರೂ ಚಿಕ್ಕೀರನ ಕೂಗಿಗೆ

ಬುಲೆಟ್ ಸ್ಪೀಡ್ ನಲ್ಲಿ ಬಂದು ಅವನ ಅಕ್ಕ ಪಕ್ಕದಲ್ಲಿ ಜಮಾಯಿಸಿದರು. ಆದರೂ ಹಾವನ್ನು ಒಡೆಯದೆ ತಾವು ತಂದಿದ್ದ ಆಯುಧಗಳಿಗೆ ವಿಶ್ರಾಂತಿ ನೀಡಿ ಆ ಅಪರೂಪದ ದೃಶ್ಯವನ್ನು ನೋಡುತ್ತಾ ನಿಂತರು.

ನಾಗರ ಹಾವು ಅದಕ್ಕಿಂತಲೂ ಗಾತ್ರದಲ್ಲಿ ಬಲು ಚಿಕ್ಕದಾದ ಕಪ್ಪು ದೇಹವುಳ್ಳ ಮತ್ತು ಸ್ವಲ್ಪ ಸ್ವಲ್ಪ ದೂರಕ್ಕೂ ಬಿಳಿ ಪಟ್ಟೆಗಳನ್ನು ಹೊಂದಿರುವ ಹಾವಿನ ಅರ್ಧ ದೇಹವನ್ನು ನುಂಗಿದೆ. ಆ ಸಣ್ಣನೆಯ ಹಾವು ತನ್ನ ಪ್ರಾಣ ಉಳಿಸಿಕೊಳ್ಳಲು ಹತ್ತಿರದಲ್ಲಿದ್ದ ಹುರುಳಿ ಗಿಡದ ಬುಡವನ್ನು ತನ್ನ ಬಾಲದಿಂದ ಸುತ್ತಿಹಿಡಿದಿದೆ. ಕಂಡಾಕ್ಷಣವೆ ಇದು ಕಟ್ಟು ಹಾವು, ನಮ್ಮ ದೇಶದಲ್ಲಿ ಕಾಣುವ ವಿಷವಿರುವ ಹಾವುಗಳಲ್ಲಿ ಇದು ಒಂದು ಹಾಗೂ ಈ ಹಾವಿನಿಂದಲೇ ಮನುಷ್ಯರ ಸಾವು ಹೆಚ್ಚು ಎಂದು ನಾನು ತಿಳಿದಿದ್ದರೂ ಇದನ್ನು ಇವರಿಗೆ ಹೇಳಿದರೆ ಎಲ್ಲಿ ಅವನ್ನು ಹೊಡೆದು ಹಾಕುವರೋ ಎಂದು ತಿಳಿದು ಮೂಕ ಪ್ರೇಕ್ಷಕನಂತೆ ಆ ನಾಟಕವು ಎಲ್ಲಿಯ ತನಕ ಮುಟ್ಟುವುದೋ ಎಂದು ಎಲ್ಲರಂತೆಯೇ ಕುತೂಹಲದಿಂದ ನೋಡುತ್ತಾ ನಿಂತೆ.




ನಾಗರ ಹಾವು ತನ್ನ ಬಳಿ ಇರುವ ಜನರಾರನ್ನೂ ಲೆಕ್ಕಿಸದೆ ಸಿಕ್ಕ ಬೇಟೆಯನ್ನು ಪೂರ್ಣ ಪ್ರಯತ್ನದಿಂದ ತನ್ನೆಲ್ಲಾ ಬಲವನ್ನು ಬಿಟ್ಟು ಎಳೆಯಲು ಶತಪ್ರಯತ್ನ ಮಾಡುತ್ತಿದೆ, ಇತ್ತ ಅರ್ಧದೇಹವನ್ನೇ ನಾಗರ ಹಾವಿಗೆ ಅರ್ಪಿಸಿದ್ದರೂ *"ಉಳಿದ ಭಾಗದ ಸಹಾಯದಿಂದಲೇ ಪ್ರಾಣ ಉಳಿಸಿಕೊಳ್ಳುವೇ"* ಎಂದು ಕಟ್ಟಾವು ತನ್ನ ಬಾಲವನ್ನು ಹುರುಳಿಗಿಡದ ಬುಡಕ್ಕೆ ಸುತ್ತಿ ಗಟ್ಟಿಯಾಗಿ ಹಿಡಿದಿದೆ. ಇತ್ತ ನಾಗರಹಾವು *"ಹೋಗಲಿ ಪಾಪ ಬದುಕಿಕೋ"* ಎಂದು ಕಟ್ಟಾವನ್ನು ಬಿಡದು! *"ನನ್ನ ಕೈಲಿ ಇನ್ನಾಗದು ತೆಗಿದುಕೋ ನನ್ನ ಪ್ರಾಣವನ್ನು."* ಎಂದು ಕಟ್ಟಾವು ಗಿಡದಿಂದ ತನ್ನ ಬಾಲವನ್ನು ತೆಗೆಯದು, ಇವೆರಡಕ್ಕು ಕೇಂದ್ರವಾದ ಇಷ್ಟೆಲ್ಲಾ ನಾಟಕಕ್ಕೂ ಕಾರಣವಾದ ಹುರುಳಿಗಿಡವೂ ಅತ್ತ ಕಿತ್ತು ಬರದು. ಅಂತು ಭೀಮ-ದುರ್ಯೋಧನನ ಯುದ್ದದಂತಾಗಿತ್ತು ಈ ಘಟನೆ. ಯಾವುದಕ್ಕೆ ಜಯವೋ, ಯಾವುದಕ್ಕೆ ಅಪಜಯವೋ ಎಂಬ ನಿರೀಕ್ಷಣೆಯಲ್ಲಿಯೇ ದೊಣ್ಣೆ ತಂದ ಗಂಡಸರು ಒಂದು ತುದಿಯನ್ನು ನೆಲಕ್ಕೆ ಊರಿ ಮತ್ತೊಂದು ತುದಿಯ ಮೇಲೆ ತಮ್ಮೆರಡು ಹಸ್ತಗಳನ್ನು ಇಟ್ಟು, ಅದರ ಮೇಲೆ ತಮ್ಮ ಗಲ್ಲವನ್ನಿಟ್ಟು ಕೌತುಕವಾಗಿ ನೋಡುತ್ತಾ ನಿಂತರೆ ಮತ್ತೊಂದು ಬದಿಯಲ್ಲಿ ಎಲ್ಲಾ ಮನೆಕೆಲಸಗಳನ್ನೂ ಬಿಟ್ಟು ಬಂದು ನೋಡುತ್ತಿದ್ದ ಹೆಂಗಳೆಯರೆಲ್ಲಾ ಬಾಯನ್ನು ಸೆರಗುಗಳಿಂದ ಮುಚ್ಚಿಕೊಂಡು ಕಣ್ಣಗಲಿಸಿ *'ಅಲ್ಲಾ ನೋಡ್ದ ಹಾವು. . . ಹಾವನ್ನೇ ನುಂಗ್ತಾದಲ್ಲ, ಎಂತಾ ಕಾಲ ಬಂದದೆ! ಮುಂದೆ ಒಂದಿನ ಮನ್ಸ್ರನ್ನೇ ಮನ್ಸ್ರು ತಿನ್ನೋ ಹಂಗೆ ಆಯ್ತುದೇನೋ?'* ಎಂದು ಗುಸುಗುಡುತ್ತಾ ಧೈರ್ಯಮಾಡಿ ಹಾವಿಗೆ ಸ್ವಲ್ಪ ಸ್ವಲ್ಪವೇ ಹತ್ತಿರ ಬರುತ್ತಿದ್ದರು.



ಜನಗಳೆಲ್ಲಾ ಅಷ್ಟು ಗಲಾಟೆ ಮಾಡುತ್ತಾ, ಹತ್ತಿರ ಬರುತ್ತಿದ್ದರೂ ನಾಗರಹಾವು ತನ್ನ ಬಾಯಲ್ಲಿದ್ದ ತುತ್ತನ್ನು ಬಿಡದೆ ಏಕಾಗ್ರಚಿತ್ತವಾಗಿರುವುದನ್ನು ಹಾಗೂ ಅರ್ಧ ಜೀವವೇ ಹೋಗಿದ್ದರೂ ಇನ್ನೂ ನಾಗರಹಾವಿಗೆ ಶರಣಾಗದೆ ಧೃತಿಗೆಡದೆ ಪ್ರಾಣ ಉಳಿಸಿಕೊಳ್ಳಲು ಆಸರೆಯಾಗಿರುವ ಹುರುಳಿಗಿಡವನ್ನು ಹಿಡಿದು ಕೊನೆ ಉಸಿರಿನವರೆಗೂ ಹೋರಾಡಲು ಪ್ರಯತ್ನಿಸುತ್ತಿರುವ ಕಟ್ಟಾವನ್ನು ಕಂಡು, ಸಣ್ಣಸಣ್ಣದಕ್ಕೆಲ್ಲಾ ತಲೆ ಕೆಡಿಸಿಕೊಂಡು ಸಾಯುವ ಬುದ್ಧಿಜೀವಿಗಳಾದ ಮಾನವರನ್ನು ನೆನಪಿಸಿಕೊಳ್ಳುತ್ತಾ ಈ ಸಣ್ಣ ಜೀವಿಗಳಿಗಿಂತಲೂ ಹೇಡಿಗಳಾದೆವೇ ನಾವು? ಎಂದೆನಿಸಿತು. ಈ ಅಪರೂಪದ ದೃಶ್ಯವನ್ನು ಸೆರೆಹಿಡಿಯಲು ನನ್ನ ಬಳಿ ಕ್ಯಾಮೆರಾ ಇಲ್ಲವಲ್ಲ ಎಂದು ನಾನು ಕೈ ಕೈ ಹಿಸುಕಿಕೊಂಡರೂ, ಅಂತು ಹಾವುಗಳೆರಡನ್ನೂ ಬಂದ ಜನರು ಹೊಡೆದು ಸಾಯಿಸದೆ ಇದ್ದುದ್ದನ್ನು ಕಂಡು ಸಮಾಧಾನವೇ ಆಯಿತು. ಈ ನಾಟಕದ ಕ್ಲೈಮ್ಯಾಕ್ಸ್ ಏನಾಗುತ್ತದೆ? ಎಂದು ನೋಡುವ ಕುತೂಹಲ ಎಲ್ಲರಿಗೆ ಇದ್ದರೂ, ಗಂಡಂದಿರ ಬೈಗುಳದಿಂದ ತಪ್ಪಿಸಿಕೊಳ್ಳಲು ಹೆಂಗಸರೆಲ್ಲಾ ಅಡುಗೆ ಮಾಡಲು ಮನೆಯ ಕಡೆ ಹೊರಟರೆ, ಕತ್ತಲೆಯು ತನ್ನ ಸಾಮರ್ಥ್ಯವನ್ನು ಎಲ್ಲೆಡೆ ಬೀರಿದ್ದರಿಂದ ಎಲ್ಲರೂ ಮುಂದೆ ಹೋಗಿದ್ದ ಹೆಂಗಸರುಗಳ ದಾರಿಯನ್ನೇ ಹಿಡಿದರು. ನನಗೆ ಇರಲು ಮನಸ್ಸಿದ್ದರೂ ನಾನು ನನ್ನ ಮನೆಗೆ ಹಿಂದುರುಗಬೇಕಿದ್ದರಿಂದ ಅವರೊಂದಿಗೆ ಹೆಜ್ಜೆಹಾಕಿದೆ.




- ನಾಗೇಶ್ .ಓ .ಎಸ್





# ದುರ್ಗಪ್ಪನ ಶಿಕಾರಿ

ಸುಮಾರು ವರ್ಷಗಳ ಹಿಂದೆ ನಮ್ಮೂರಿನ ಸುತ್ತಲಿನ ಹಳ್ಳಿಗಳಲ್ಲಿ ಶಿಕಾರಿ, ಕಳ್ಳಬೇಟೆಗೆ ಕುಖ್ಯಾತನೆನಿಸಿದ್ದ ದುರ್ಗಪ್ಪ. ಅವನು ತನ್ನ ಹೆಂಡತಿ ಭೀಮಕ್ಕ ಮತ್ತು ಹನ್ನೆರಡು ವರ್ಷದ ಮಗಳು ಮಂಜಿಯೊಡನೆ ನಮ್ಮೂರಿನ ಪಕ್ಕದಲ್ಲೇ ಇದ್ದ ತೆಂಗು, ಮಾವು, ಸೀಬೆ ಹೀಗೆ ಹಲವಾರು ಮರಗಳಿಂದ ಕೂಡಿದ್ದ ಅಂದಾಜು ಆರೇಳು ಎಕರೆ ತೋಟದ ಮೇಲ್ವಿಚಾರಕನಾಗಿ ವಾಸವಾಗಿದ್ದ. ನೋಡಲಿಕ್ಕೆ ಎತ್ತರವಾಗಿದ್ದ, ದಪ್ಪ ಮೀಸೆಯ ಇವನು ಬಾಯಲ್ಲಿ ಬೀಡಿಯನ್ನು ಕಚ್ಚಿ ಬಂದೂಕು ಹೆಗಲಿಗೇರಿಸಿ ರಾತ್ರಿ ಕಾಡಿನ ಕಡೆ ಹೊರಟನೆಂದರೆ ಶಿಕಾರಿಯಾಗದೆಯೆ ಕಾಡಿನಿಂದ ಆಚೆ ಕಾಲೂ ಸಹ ಇಡುತ್ತಿರಲಿಲ್ಲ. ಅವನ ಹೆಂಡತಿ ಭೀಮಕ್ಕ ಸಾಧು ಪ್ರಾಣಿಯಂತವಳು. ಗಂಡನ ಶಿಕಾರಿಯ ಬಗ್ಗೆ ಮೂದಲಿಸುತ್ತಿದ್ದರೂ ತಂದ ಬೇಟೆಯನ್ನು ಮಾತ್ರ ಗಂಡ, ಮಗಳು ಬಾಯಿಚಪ್ಪರಿಸಿ ತಿನ್ನುವಷ್ಟು ರುಚಿಯಾಗೇ ಮಾಡಿ ಉಣಬಡಿಸುತ್ತಿದ್ದಳು. ಇನ್ನು ಮಂಜಿಗೆ ಬೆಳಗಾಗುತ್ತಿದ್ದುದೆ ಅಪ್ಪನ ಶಿಕಾರಿಯನ್ನು ಕಂಡು, ಅವಳು ಶಾಲೆಗೆ ಹೋಗುತ್ತಿದ್ದುದೆ ಅಪ್ಪ ತಂದ ಬಾಡಿನ ರುಚಿಯನ್ನು ಸವಿದು!.



ದುರ್ಗನು ಬೇಟೆಯನ್ನೆ ತನ್ನ ಖಾಯಂ ವೃತ್ತಿ ಮಾಡಿಕೊಂಡಿದ್ದರಿಂದ ಸಂಸಾರದ ಗಾಡಿಯನ್ನು ಎಳೆಯಲು ಭೀಮಕ್ಕನು ಕೂಲಿನಾಲಿಗೆ ಹೋಗಿ, ತೋಟದಲ್ಲಿ ಬೀಳುವ ತೆಂಗಿನ ಕಾಯಿಗಳನ್ನು, ಸೀಬೆ ಹಣ್ಣನ್ನು ಮಾರಿ ಬರುವ ಪುಡಿಕಾಸಿನಿಂದ ಬೇಕಿದ್ದ ಉಪ್ಪು-ಬೇಳೆಯನ್ನು ಕೊಂಡು ಹೇಗೋ ಕಾಲದೂಡುತ್ತಿದ್ದಳು. ಆದ್ದರಿಂದ ಊರಿನವರೆಲ್ಲರೂ ತೆಂಗಿನ ಕಾಯಿಯನ್ನು ಅಂಗಡಿಗಳಿಂದ ತರುವ ಗೋಜಿಗೆ ಹೋಗುತ್ತಿರಲೇ ಇಲ್ಲ.

ಯುಗಾದಿ ಹಬ್ಬ ಬಂದು ಊರಿನ ಬಾಗಿಲಲ್ಲಿ ನಿಂತಿತ್ತು. ಊರಿನವರೆಲ್ಲಾ ಹಬ್ಬದ ತಯಾರಿಯಲ್ಲಿ ಮುಳುಗಿ ಹೋಗಿದ್ದರು. ನಮ್ಮ ಮನೆಯೂ ಇದರಿಂದ ಹೊರತೇನಾಗಿರಲಿಲ್ಲ. ಹಬ್ಬಕ್ಕೆ ಎಲ್ಲಾ ಪದಾರ್ಥಗಳನ್ನು ಅಣಿ ಮಾಡಿಕೊಳ್ಳುತ್ತಿದ್ದ ನಮ್ಮ ಅಮ್ಮ, ಭೀಮಕ್ಕನಿಂದ ತೆಂಗಿನ ಕಾಯಿ ತರುವ ಜವಾಬ್ದಾರಿಯನ್ನು ನನ್ನ ತಲೆಗೆ ಕಟ್ಟಿದ್ದರಿಂದ ಅಂದು ಸಂಜೆ ನಾನು ನಮ್ಮ ಮನೆಯ ಪಕ್ಕದಲ್ಲೇ ಇದ್ದ ಅವರ ತೋಟಕ್ಕೆ ತೆಂಗಿನಕಾಯಿ ತರಲು ಹೊರಟೆ. ತೋಟದ ಮಧ್ಯದಲ್ಲಿದ್ದ ದುರ್ಗನ ಮನೆಗೆ ನಡೆದುಕೊಂಡು ಹೋಗುತ್ತಿದ್ದ ನನಗೆ ಅಕ್ಕಪಕ್ಕದಲ್ಲಿದ್ದ ಸೀಬೆಹಣ್ಣುಗಳು ಕೈ ಬೀಸಿ ಕರೆದಂತೆ ಭಾಸವಾಗುತ್ತಿತ್ತು. ಆದರೆ ದುರ್ಗನ ದೊಡ್ಡ ಮೀಸೆಯ ಭಯಾನಕ ಮುಖ ನೆನಪಿಗೆ ಬಂದು ನನಗೆ ಭಯವಾಗಿ ಮತ್ತೇ ಸೀಬೆ

ಹಣ್ಣನ್ನು ನೋಡಿದರೆ ಎಲ್ಲಿ ಆಸೆಯಾಗಿ ಹಣ್ಣನ್ನು ಕಿತ್ತು ದುರ್ಗನ ಕೈಲಿ ಬೈಸಿಕೊಳ್ಳುವೆನೋ ಎಂದು ಹೆದರಿ, ಕತ್ತನ್ನು ಆ ಕಡೆ ಈ ಕಡೆ ತಿರುಗಿಸದೆ ಸುಮ್ಮನೆ ದಾರಿ ನೋಡುತ್ತಾ, ಜೀನು ಹಾಕಿದ ಕುದುರೆಯಂತೆ ನಡೆದೆ. ನನ್ನ ಬರುವಿಕೆಯನ್ನು ಮನೆಯೊಡತಿಗೆ ಕೂಗಿ ಹೇಳುತ್ತಿದ್ದ ದುರ್ಗನ ಕಂತ್ರಿನಾಯಿಯ ಕೂಗಿಗೆ ಸ್ಪಂದಿಸಿ ಪಾತ್ರೆ ತೊಳೆಯುತ್ತಿದ್ದ ನನ್ನ ಸಹಪಾಠಿಯಾದ ದುರ್ಗನ ಮಗಳು ಮಂಜಿಯು ನನ್ನನ್ನು ನೋಡಿ *"ಏನೋ ಮಾದ. . . ಬಂದಿದ್ದು?"* ಎಂದಳು. ನಾನು ಕಾ…ಎನ್ನುವಷ್ಟರಲ್ಲಿ *"ಯಾರೆ ಅದು?"* ಎಂದು ಮನೆಯಿಂದ ಹೊರ ಬಂದ ಭೀಮಕ್ಕನನ್ನು ಕಂಡು ಈ ನಾಯಿಯ ಕಾಟದಿಂದ ತಪ್ಪಿಸಿಕೊಂಡರೆ ಸಾಕು ಎಂದು ಒಂದೇ ಉಸಿರಿಗೆ *"ನಮ್ಮಮ್ಮ ಹೇಳುದ್ರು ನಾಕ್ ಕಾಯ್ ಕೊಡ್ಬೇಕಂತೆ, ಹಬ್ಬಕ್ಕೆ"* ಎಂದೆ.



*"ಯಾಕ್ ಅಲ್ಲೆ ನಿಂತ್ಕೊಂಡೆ ಬಾ….ಮಾದ, ತೂ ಈ ನಾಯಿನೋ ನಮ್ಮೊರ್ ಯಾರು ಬೇರೆಯವರ್ ಯಾರು ಅಂತಾ ಗೊತ್ತಾಗಲ್ಲಾ, ತೂ… ಬಾ ಇತ್ತ"* ಎಂದು ನನ್ನನ್ನು ನೋಡಿ ಬೊಗಳುತ್ತಿದ್ದ ನಾಯಿಯನ್ನು ಓಡಿಸಿದ ಮೇಲೆ ಮನೆಯ ಹತ್ತಿರ ಬಂದೆ. ಭೀಮಕ್ಕ *"ಏನ್ ಅಂದೆ ಮಾದ? ಹಾಳಾದ್ ನಾಯಿ ಸೌಂಡ್ ಅಲ್ಲಿ ಏನು ಕೇಳಿಸ್ಲಿಲ್ಲಾ"* ಎಂದು ಮತ್ತೆ ಕೇಳಿದರು. *"ನಾಕ್ ಕಾಯಂತೆ, ಅಮ್ಮ ಹೇಳುದ್ರು"* ಎಂದೆ. *"ಓ, ಕಾಯ, ಕಾಸ್ ತಂದಿದ್ಯ?"* ಎಂದಾಗಲೆ ಗೊತ್ತಾದದ್ದು ಇದಕ್ಕೂ ಹಣಕೊಡಬೇಕೆಂದು. ನನ್ನ ಮುಕ ನೋಡಿ ಭೀಮಕ್ಕನಿಗೆ ಇವನ ಹತ್ತಿರ ಕಾಸಿಲ್ಲ ಎಂದು ಗೊತ್ತಾಯಿತೋ ಏನೋ *"ಕೊಟ್ಟಿಲ್ವ? ಸರಿ, ಕಾಯಿ ಕೊಡ್ತಿನಿ ನಾಳೆನೆ, ತಂದ್ ಕೊಟ್ಬಿಡ್ಬೇಕಂತೆ ಅಂತ ಹೇಳು ನಿಮ್ಮಮ್ಮಾಗೆ. ಹಬ್ಬಕ್ಕೆ ಕಾಸೇ ಇಲ್ಲ, ಕಾಯ್ ಇಸ್ಕೊಂಡಿರೊರು ಯಾರು ಇನ್ನು ಕೊಟ್ಟಿಲ್ಲ. ಈ ಮನ್ಸುಂಗೆ ಹೆಂಡ್ರು ಮಕ್ಳು ಹಬ್ಬ ಏನು ಬೇಡ, ಬಾಡ್ ಇದ್ರೆ ಸಾಕು.. ಇವ್ನ ಕಟ್ಕೊಂಡು. . ."* ಎಂದು ಗಂಡನ್ನ ಏನೇನೋ ಬೈಯುತ್ತಾ ಕಾಯನ್ನು ತರಲು ಒಳಗಡೆ ಹೊರಟಳು ಭೀಮಕ್ಕ. ನಾನು ಮಂಜಿಯ ಜೊತೆ ಹಾಗೆ ಹರಟುತ್ತಾ ಭೀಮಕ್ಕ ಬರುವುದನ್ನೇ ಅರಸುತ್ತಾ ನಿಂತಿರಬೇಕಾದರೆ ಒಮ್ಮೆಲೆ ಪಕ್ಕದಲ್ಲೇ ಬಾಂಬ್ ಬಿದ್ದಹಾಗೆ ಶಬ್ಧವಾಯಿತು. ನಾನು ಗಾಬರಿಯಿಂದ ಏನಾಯಿತೋ? ಎಂದು ಕೇಳಲು ಮಂಜಿಯ ಕಡೆ ತಿರುಗುವುದರಲ್ಲೇ, ಪಾತ್ರೆ ತೊಳೆಯುತ್ತಿದ್ದ ಮಂಜಿ ಮಾಯ. *"ಇವತ್ತು ತ್ವಾಟ್ದಲ್ಲೇ ಶುರುಮಾಡ್ಕೊ ಬಿಟ್ಟಾವನಲ್ಲಪ್ಪಾ, ನಾಳೆ ಹಬ್ಬ ಅನ್ನೋದ್ನು ಮರ್ತು . . ."* ಎಂದು ಮನೆಯಿಂದ ಹೊರಬಂದ ಭೀಮಕ್ಕನ ಮಾತನ್ನು ಕೇಳಿ ಇದು ದುರ್ಗನ ಕೆಲಸವೇ ಎಂದು ಗೊತ್ತಾದ ನಾನು ಶಬ್ಧ ಬಂದ ಕಡೆ ಹೋಗುತ್ತಿದ್ದ ಭೀಮಕ್ಕನನ್ನು ಹಿಂಬಾಲಿಸಿದೆ. ಆದರೆ ನಾವು ಅಲ್ಲಿಗೆ ತಲುಪುವುದಕ್ಕೆ ಮುಂಚೆಯೇ ಮಂಜಿಯು ಎರಡು ಕೈಗಳಲ್ಲಿ ಯಾವುದೋ ತಿಳಿ ಕಂದು ಬಣ್ಣದಿಂದ ಕೂಡಿದ್ದ ಕೋಳಿಯ ರೀತಿ ಇದ್ದ ಸಣ್ಣ ಹಕ್ಕಿ ಮರಿಗಳನ್ನು ಹಿಡಿದುಕೊಂಡು ಬರುತ್ತಿದ್ದದನ್ನು ಕಂಡು ಮತ್ತೆ ಅಲ್ಲಿಗೆ ಹೋಗಿ ಉಪಯೋಗವಿಲ್ಲ ಎಂದು ಸುಮ್ಮನೆ ಅವಳೊಂದಿಗೆ ಹಿಂತುರುಗಿದೆವು. ಆ ಸಣ್ಣ ಹಕ್ಕಿಗಳು ಇನ್ನು ಜೀವಂತವಾಗಿ ಇದ್ದದನ್ನು ಗಮನಿಸಿದ ನಾನು *"ಏನ್ ಹಕ್ಕಿ ಮಂಜಿ ಅವು"* ಎಂದೆ.

*"ಅಯ್ಯೊ ನೋಡಿಲ್ವ ಮಾದ ಇವು, ಗೌಜು ಅಂತ, ಇವು ಇನ್ನು ಮರಿ. ನಮ್ಮಪ್ಪ ದೊಡ್ಡದನ್ನ ಹೊಡ್ದಿದಾರೆ ಅದನ್ನ ಎತ್ಕೊಂಡು ಬರ್ತಾವ್ರೆ"* ಎಂದಳು.

*"ಮತ್ತೆ ಏನ್ ಮಾಡ್ತಿರ ಇದನ್ನ?"* ಎಂದೆ.

*"ಸಾಕಿ ದೊಡ್ಡದ್ ಮಾಡಿ ಬೇಸ್ಕೊಂಡ್ ತಿಂತೀವಿ"* ಎಂದಳು ಮಂಜಿ

*"ಬದುಕ್ತಾವ ಇವು?, ಕಾಡಲ್ಲಿದ್ದವು"*ಎಂದದಕ್ಕೆ.

*"ಹೋ ಕೊಳಿ ತರನೇ ಇದು ಸಾಕಕೇನ್ ಕಷ್ಟ ಇಲ್ಲ. ಆದ್ರೆ ಕೂಡಾಕ್ಬೇಕು ಇಲ್ಲ ಅಂದ್ರೆ ಹಾರೋಗುತ್ತೆ"* ಎಂದು ಮನೆ ಹತ್ತಿರ ಬಂದಿದ್ದರಿಂದ ಜೊತೆಯಲ್ಲೆ ಬರುತ್ತಿದ ಭೀಮಕ್ಕ ಮತ್ತು ಮಂಜಿ ಆ ಮರಿಗಳನ್ನು ಹಿಡಿದುಕೊಂಡು ಒಳಹೋದರು. ಅವಳನ್ನು, ನನಗೂ ಒಂದು ಕೊಡು ಎಂದು ಕೇಳಲು ಮನಸ್ಸು ಬಂದರೂ ಅಮ್ಮ ಬೈಯುವರೆಂದು ಸುಮ್ಮನಾದೆ. ಭೀಮಕ್ಕ ಮನೆಯಿಂದ ಕಾಯಿ ತಂದು ಕೊಡುವಷ್ಟರಲ್ಲಿ ದುರ್ಗನು ಬಲಗೈಯಲ್ಲಿ ಕೋಳಿಯ ಹಾಗೆ ಇದ್ದ ಗೌಜನ್ನು, ಎಡಗೈಯಲ್ಲಿ ಹೆಗಲ ಮೇಲಿದ್ದ ಕೋವಿಯನ್ನು ಹಿಡಿದು ಬರುತ್ತಿದ್ದ. ಬಂದವನು ಮಂಜಿಗೆ ನೀರುತರಲು ಹೇಳಿ ಮನೆಯ ಗೋಡೆಗೆ ಕೋವಿಯನ್ನೊರಗಿಸಿ ಅಲ್ಲೇ ಪಕ್ಕದಲ್ಲಿದ್ದ ಕಲ್ಲಿನ ಮೇಲೆ ಕುಳಿತು ಅದರ ಪುಕ್ಕವನ್ನು ತರೆಯಲು ಶುರುಮಾಡಿದ. ನನಗೆ ಅಯ್ಯೋ ಎನ್ನಿಸುತ್ತಿತ್ತು ಆ ದೃಶ್ಯ. ಆದರೆ ಆತ ದಿನಾಲು ಈ ರೀತಿ ಎಷ್ಟು ಜೀವಿಗೂಳನ್ನು ಬಲಿ ತೆಗೆದುಕೊಂಡಿರುವನೋ? ಅಂದುಕೊಂಡು  ಬಂದ ಕೆಲಸವಾದ್ದರಿಂದ ಕಾಯಿ ತೆಗೆದುಕೊಂಡು ಹೊರಟೆ. ಬರುವಾಗ ದುರ್ಗನು ಮನೆಯಲ್ಲೇ ಇದ್ದಾನೆ ಎಂದು ನನಗೆ ಗೊತ್ತಿದ್ದರಿಂದ ಬೇಕಾದಷ್ಟು ಸೀಬೆ ಹಣ್ಣನ್ನು ಕಿತ್ತು ಜೋಬು ತುಂಬಿಸಿಕೊಂಡು ಮನೆ ಸೇರಿದೆ.




- ಮಹದೇವ .ಕೆ .ಸಿ



# ಬಣ್ಣ ಬದಲಿಸುವ ಓತಿ

ಏಪ್ರಿಲ್ ನ ಒಂದು ಮುಂಜಾನೆ ತಮ್ಮ ಮತ್ತು ಸ್ನೇಹಿತೆಯನ್ನು ತುಂಗಾ ನದಿಯ ತೀರಕ್ಕೆ ಕರೆದುಕೊಂಡು ಹೋಗಿ, ಅಲ್ಲಿನ ಪ್ರಕೃತಿಯ ಸೌಂದರ್ಯದ ಸವಿಯನ್ನುಣಿಸೋಣ ಎಂದು ಯೋಚಿಸಿದೆ. ಹೀಗೆ ಎಳೆ ಬಿಸಿಲನ್ನು ಆಸ್ವಾದಿಸುತ್ತಾ, ಯಾವುದಾದರೂ ಹಕ್ಕಿ ಸಿಗಬಹುದು ಎಂದು ಸುತ್ತಲೂ ಕಣ್ಣನ್ನು ಹಾಯಿಸುತ್ತಾ, ಕೆಲವೇ ಸಮಯದಲ್ಲಿ ಅವರೂ ಈ ಹುಡುಕಾಟದಲ್ಲಿ ಭಾಗಿಯಾಗಿದ್ದಾರೆಂದು ಮನಗಂಡು ಸಹಜವಾಗಿಯೇ ಖುಷಿ ಆಯಿತು. ಕೊನೆಗೆ ಹಿಂದಿನ ದಿನ ನಿರ್ಧರಿಸಿದಂತೆ ಗಾಜನೂರಿನ ಬಳಿ ಬಂದು, ಅಲ್ಲಿಂದ ಸೊಗಸಾಗಿ ಕಾಣುವ ನಿಸರ್ಗದ ಉಪಾಸನೆಯಲ್ಲಿ ಎಲ್ಲರೂ ತಲ್ಲೀನರಾಗಿದ್ದೆವು.



ಹೀಗೆ ಮತ್ತೆ ನಮ್ಮ ನಡಿಗೆಯನ್ನು ಮುಂದುವರೆಸುತ್ತಿದ್ದಾಗ, ಪಕ್ಕದ ಕಲ್ಲು ಕಂಬದ ಮೇಲೆ ಕಿತ್ತಳೆ ಬಣ್ಣದ ಓತಿಕ್ಯಾತದಂತಹ ಸರೀಸೃಪವು ಹಾರಿದಂತೆ ತೋರಿತು. ಮೊದಲ ನೋಟಕ್ಕೆ ಗೋಸುಂಬೆ ಆಗಿರಬಹುದೆಂದು ಅನಿಸಿದರೂ, ನಂತರ ಅಲ್ಲ ಎಂದು ಒಳ ಮನಸ್ಸು ಹೇಳಿತು.

ಸಾಮಾನ್ಯವಾಗಿ ಕಂದು ಬಣ್ಣದಲ್ಲಿ ಕಾಣುವ ಇದಕ್ಕೆ Oriental Garden Lizard ಅಥವಾ Changeable lizard ಎಂದು ಹೆಸರು. ಸಂತಾನೋತ್ಪತ್ತಿಯ ಸಮಯದಲ್ಲಿ ತಮ್ಮ ಬಣ್ಣವನ್ನು ಬದಲಾಯಿಸುವ ಇವು, ಏಷ್ಯಾದಲ್ಲಿ ಅಳಿವಿನಂಚಿನಲಿ ಇಲ್ಲದಿರುವ ಸರೀಸೃಪಗಳ ಸಾಲಿಗೆ ಸೇರುತ್ತದೆ. ನಂತರದ ಕೆಲವು ಕ್ಷಣಗಳಲ್ಲಿ ಕ್ಯಾಮೆರಾ ಕಣ್ಣಿನಲ್ಲಿ ಸೆರೆಗೊಂಡಾಗ ಅದರ ಬಣ್ಣವನ್ನು ನೋಡಿ ನಾವು ಬೆರಗಾಗಿದ್ದಂತೂ ಹೌದು.

ಸಾಮಾನ್ಯವಾಗಿ ಇವುಗಳಲ್ಲಿ ಗಂಡು ಮತ್ತು ಹೆಣ್ಣುಗಳೆರೆಡೂ ಕಂದು ಬಣ್ಣದಲ್ಲಿದ್ದರೂ, ಸಂತಾನೋತ್ಪತ್ತಿಯ ಸಮಯದಲ್ಲಿ ಗಂಡು ಮಾತ್ರ ತಮ್ಮ ಬಣ್ಣವನ್ನು ಬದಲಾಯಿಸುತ್ತವೆ. ಭುಜ ಮತ್ತು ತಲೆಯು ಕಿತ್ತಳೆ ಮಿಶ್ರಿತ ಕೆಂಪು ಬಣ್ಣಕ್ಕೆ ತಿರುಗುತ್ತಾ, ಗಂಟಲಿನ ಭಾಗದಲ್ಲಿ ಕಪ್ಪು ಬಣ್ಣ ಗೋಚರಿಸುತ್ತದೆ. ಕೆಲವೊಮ್ಮೆ ತಲೆಯ ಭಾಗದಲ್ಲಿ ಮಾತ್ರ ಕಾಣುವ ಈ ಪ್ರಕೃತಿಯ ಸೋಜಿಗ ಇನ್ನು ಕೆಲವೊಮ್ಮೆ ಬಾಲದ ತುದಿಯವರೆಗೂ ಆವರಿಸುತ್ತದೆ. ಇತರ ಗೋಸುಂಬೆಗಳಂತೆ ಕಣ್ಣನ್ನು ಎಲ್ಲಾ ದಿಕ್ಕಿನಲ್ಲೂ ತಿರುಗಿಸಬಲ್ಲವಾದರೂ, ಸಂತಾನೋತ್ಪತ್ತಿಯ ಸಮಯದಲ್ಲಿ ಮಾತ್ರ ಬಣ್ಣವನ್ನು ಬದಲಾಯಿಸುವುದರಿಂದ ಅದಕ್ಕಿಂತ ಭಿನ್ನವಾಗಿ ನಿಲ್ಲುತ್ತದೆ.

ಕೊನೆಗೆ ಅಲ್ಲಿದ್ದ ಪುಟ್ಟ ತಮ್ಮನಿಗೆ ಅದು ಯಾಕೆ ಹೀಗೆ ಎಂಬುದನ್ನು ವಿವರಿಸಲು ಕಷ್ಟಪಡುತ್ತಾ, ಕೊನೆಗೆ ಗಂಡು ಹೆಣ್ಣನ್ನು ಆಕರ್ಷಿಸಲು ಈ ರೀತಿ ಮಾಡುತ್ತವೆ ಎಂದು ಸರಳವಾಗಿ ಹೇಳಿ, ಹೊಸತೊಂದನ್ನು ನೋಡಿದೆವು ಎಂಬ ಖುಷಿಯಲ್ಲಿ ಮನೆಯೆಡೆಗೆ ಹೆಜ್ಜೆ ಹಾಕಿದೆವು.



- ಸ್ಮಿತಾ ರಾವ್
ಶಿವಮೊಗ್ಗ



# ನಗರದಲ್ಲಿ ಇಂದು

ಗುಬ್ಬಿ ಗಿಳಿಯ ಸುಳಿವಿಲ್ಲ
ಚಿಲಿಪಿಲಿಯ ಕಲರವವಿಲ್ಲ
ಬಣ್ಣಬಣ್ಣದ ಪತಂಗಗಳಿಲ್ಲ
ಬಾನಾಡಿಯ ತೋರಣವಿಲ್ಲ

ಝರಿ ತೊರೆಗಳಿಲ್ಲ
ಕಾರೆ ನೇರಳೆಗಳಿಲ್ಲ
ಕೋಗಿಲೆಯ ಸ್ವರವಿಲ್ಲ
ನವಿಲಿನ ನಾಟ್ಯವಿಲ್ಲ

ಗೀಜಗನ ಗೂಡಿಲ್ಲ
ಸೋಬಾನೆ ಹಕ್ಕಿಯ ಪದವಿಲ್ಲ
ತೀನಹಕ್ಕಿಯ ಗೋಚರವಿಲ್ಲ
ಮರಕುಟುಕನ ಸದ್ದಿಲ್ಲ

ಹಾಲಕ್ಕಿ ನುಡಿಯಿಲ್ಲ
ಹುಣ್ಣಿಮೆಯ ಬೆಳಕಿಲ್ಲ
ಗೊರವ ಕಾಜಾಣಗಳಿಲ್ಲ
ಎಲ್ಲವೂ ಪಲಾಯನ, ನಗರದಲ್ಲಿ ಇಂದು



- ಕೃಷ್ಣನಾಯಕ್




ಈ ಸುಂದರ ಕಾನನದಲ್ಲಿ ನಮಗೆ ಹುಲಿಗಿಂತ ಮನುಷ್ಯನದ್ದೆ ಭಯ!.



ನಮ್ಮದು ವಿಶಾಲ ಜಗತ್ತು, ಆದರೆ ಮನುಷ್ಯ ನಮ್ಮ ನೆಲೆಯನ್ನು ಹಿಮಾಲಯದಲ್ಲೂ ಬಿಟ್ಟಿಲ್ಲ!.

- ಅಂಕಿತ್ ಚಿಂತಪಲ್ಲಿ

